ಲಿಖಿತ ಮೂಲಕ ಉತ್ತರಿಸುವ
ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಸೋಮವಾರ, ದಿನಾಂಕ : 01 ನೇ ಫೆಬ್ರುವರಿ, 2021

ರಾಜ್ಯದಲ್ಲಿರುವ ಇಂಜಿನಿಯರಿಂಗ್ ಕಾಲೇಜುಗಳ ಬಗ್ಗೆ

ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

102 (100) ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಉನ್ನತ ಶಿಕ್ಷಣ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ಎಷ್ಟು ಇಂಜಿನಿಯರಿಂಗ್ ಕಾಲೇಜು ಮತ್ತು ಅನುದಾನಿತ ಕಾಲೇಜುಗಳು ಕಾರ್ಯನಿರ್ವಹಿಸುತ್ತಿದೆ; (ಸಂಪೂರ್ಣ ವಿವರ ನೀಡುವುದು)

(ಆ) ಪ್ರತಿ ಶೈಕ್ಷಣಿಕ ವರ್ಷದಲ್ಲಿ ಆಡಳಿತ ಮಂಡಳಿಗೆ ಎಷ್ಟು ಸಿ.ಇ.ಟಿ., ಕಾಮೇಡ್-ಕೆ ಸೀಟುಗಳನ್ನು ಹಂಚಲಾಗುತ್ತಿದೆ, ಕಳೆದ 3 ವರ್ಷಗಳಲ್ಲಿ ಲಭ್ಯವಿದ್ದ ಸಿ.ಇ.ಟಿ., ಕಾಮೇಡ್-ಕೆ ವಿಭಾಗಕ್ಕೆ ಎಷ್ಟು ಸೀಟುಗಳನ್ನು ಭರ್ತಿ ಮಾಡಲಾಗಿದೆ; (ಸಂಪೂರ್ಣ ವಿವರ ನೀಡುವುದು)

(ಇ) ಕಳೆದ 5 ವರ್ಷಗಳಲ್ಲಿ ಸಿ.ಇ.ಟಿ., ಕಾಮೇಡ್-ಕೆ ಅಡಿಯಲ್ಲಿ ಪ್ರವೇಶ ಪಡೆದ ವಿದ್ಯಾರ್ಥಿಗಳಿಗೆ ಎಷ್ಟು ಭಾರಿ ಪ್ರವೇಶ ಶುಲ್ಕವನ್ನು ನವೀಕರಿಸಿದೆ ಹಾಗೂ ಎಷ್ಟು ಶುಲ್ಕವನ್ನು ಹೆಚ್ಚಿಸಲಾಗಿದೆ; ಹಾಗೂ ಸರ್ಕಾರ ಕೈಗೊಂಡ ಮಾನದಂಡಗಳೇನು; ಒಬ್ಬ ವಿದ್ಯಾರ್ಥಿಗೆ ಸರ್ಕಾರ ವ್ಯಯ ಮಾಡಿದ ಮೊತ್ತವೆಷ್ಟು; (ಸಂಪೂರ್ಣ ವಿವರ ನೀಡುವುದು)

(ಈ) ಸದರಿ ಇಂಜಿನಿಯರಿಂಗ್ ಕಾಲೇಜುಗಳು ಸಹಾಯಕ ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರಿಗೆ ವಿಶ್ವವಿದ್ಯಾಲಯವು ಯಾವ ರೀತಿ ಶಿಕ್ಷಣ ತರಬೇತಿ ನಿಗಧಿಪಡಿಸಿರುತ್ತದೆ ? (ಸಂಪೂರ್ಣ ವಿವರ ನೀಡುವುದು)